# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 465 |
| ಸದಸ್ಯರ ಹೆಸರು | : | ಶ್ರೀ ರಘುನಾಥ್ ರಾವ್ ಮಲ್ಕಾಪೂರೆ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 04.02.2021 |
| ಉತ್ತರಿಸುವ ಸಚಿವರು | : | ಮಾನ್ಯ ಜಲಸಂಪನ್ಮೂಲ ಸಚಿವರು |

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್ ಜಿಲ್ಲೆಯ ಮಾಂಜ್ರಾ ಸರಣಿ ಬ್ಯಾರೇಜ್‌ಗಳಲ್ಲಿನ ಗೇಟ್ ಸಮಸ್ಯೆಯಾಗಿ, ನೀರು ನಿಲ್ಲದಿರುವುದರ ಬಗ್ಗೆ ತನಿಖೆಗೆ ಹೈಕೋರ್ಟ್ ಆದೇಶಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಅದರ ಸ್ಪಷ್ಟ ಮಾಹಿತಿ ಒದಗಿಸುವುದು; | ಬೀದರ ಜಿಲ್ಲೆಯ ಮಾಂಜ್ರಾ ನದಿಗೆ ಅಡ್ಡಲಾಗಿ ಕೃಷ್ಣಾ ಭಾಗ್ಯಜಲ ನಿಗಮ ನಿಯಮಿತದ ವತಿಯಿಂದ ನಿರ್ಮಿಸಲಾಗಿರುವ ಚಂದಾಪುರ, ಹಾಲಹಳ್ಳಿ, ಜಿರಗಿಹಾಳ ಮತ್ತು ಮಾಣಿಕೇಶ್ವರ ಬ್ಯಾರೇಜುಗಳನ್ನು ಕರ್ನಾಟಕ ನೀರಾವರಿ ನಿಗಮ ನಿಯಮಿತಕ್ಕೆ ಹಸ್ತಾಂತರಿಸಲು ಸರ್ಕಾರದ ಆದೇಶ ಸಂ: ಇ-ಜಸಂಇ/16/ಕೆಬಿಎನ್ ದಿನಾಂಕ: 01-10-2019 ರಂತೆ ಆದೇಶಿಸಲಾಗಿರುತ್ತದೆ. ಅದರಂತೆ ಈ ಕಚೇರಿಯ ಪತ್ರ ಸಂ: 704 ದಿನಾಂಕ: 23-06-2020 ರಂತೆ ಸದರಿ ಬ್ಯಾರೇಜುಗಳನ್ನು ನಿಗಮದಡಿ ಬರುವ ಬೀದರ ಜಿಲ್ಲೆಯ ಎರಡು ವಿಭಾಗಗಳಿಗೆ ತಲಾ 02 ಬ್ಯಾರೇಜುಗಳಂತೆ ಕೃಷ್ಣಾ ಭಾಗ್ಯ ಜಲನಿಗಮ ನಿಯಮಿತದಿಂದ ಹಸ್ತಾಂತರಿಸಲಾಗಿದೆ.<br>ಬ್ಯಾರೇಜ್ ಗೇಟುಗಳ ಸಮಸ್ಯೆಯಾಗಿ ನೀರು ನಿಲ್ಲದಿರುವ ಬಗ್ಗೆ ಶ್ರೀ ಗುರುನಾಥ ವಡ್ಡೆ, ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಯನ್ನು (ಡಬ್ಲ್ಯೂಪಿ ಸಂ.15937/2019) ಕರ್ನಾಟಕ ಉಚ್ಚನ್ಯಾಯಾಲಯದಲ್ಲಿ ದಿ:27.06.2019 ರಂದು ವಿಚಾರಣೆ ನಡೆದು ಅಧೀಕ್ಷಕ ಅಭಿಯಂತರರು, ಕೃಭಾಜನಿನಿ. ಜೆ.ಬಿ.ಸಿ. ವೃತ್ತ, ಭೀಮರಾಯನಗುಡಿ ಇವರು ತಪಾಸಣಾ ವರದಿಯನ್ನು ಅಂಗೀಕರಿಸಿ ಅದರ ಮೇರೆಗೆ ಇತ್ಯರ್ಥವಾಗಿರುತ್ತದೆ ಮತ್ತು ಸದರಿ ಮೊಕದ್ದಮೆಯನ್ನು ವಜಾಗೊಳಿಸಲಾಗಿದೆ. |
| ಆ | ನಾಲ್ಕು ಬ್ಯಾರೇಜ್‌ಗಳ ನಿರ್ಮಾಣಕ್ಕೆ ಖರ್ಚು ಮಾಡಲಾಗಿರುವ ಹಣ ಎಷ್ಟು; ಮತ್ತು ಯಾವ ವರ್ಷದಲ್ಲಿ ಬ್ಯಾರೇಜ್‌ಗಳನ್ನು ನಿರ್ಮಾಣ ಮಾಡಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು) | ಬೀದರ್ ಜಿಲ್ಲೆಯಡಿ ಗೋದಾವರಿ ಕಣಿವೆಯ ಮಾಂಜ್ರಾ ನದಿ ಪಾತ್ರದಡಿ ಕೃಷ್ಣಾ ಭಾಗ್ಯ ಜಲ ನಿಗಮದ ವತಿಯಿಂದ ನಿರ್ಮಿಸಲಾದ 4 ಸರಣಿ ಬ್ರಿಡ್ಜ್ ಕಂ ಬ್ಯಾರೇಜ್ ಕಾಮಗಾರಿಗಳ ವಿವರಗಳು ಈ ಕೆಳಗಿನಂತಿವೆ;<br>(ರೂ. ಕೋಟಿಗಳಲ್ಲಿ) |

| ಕ್ರ ಸಂ. | ಯೋಜನೆ ಹೆಸರು | ನೀರಿನ ಬಳಕೆ (ಟಿ.ಎಂ.ಸಿ) | ನಿರ್ಮಾಣದ ವೆಚ್ಚ | ನೀರಾವರಿ ಒಳಪಡುವ ಕ್ಷೇತ್ರ ಹೆ.ಗಳಲ್ಲಿ. | ಪೂರ್ಣಗೊಂಡ ವರ್ಷ |
|---|---|---|---|---|---|
| 1 | ಜೀರಗಿಹಾಳ ಬ್ರಿಡ್ಜ್ ಕಂ ಬ್ಯಾರೇಜ್ | 0.78 | 57.84 | 990 | 2014 |
| 2 | ಮಾಣಿಕೇಶ್ವರ ಬ್ರಿಡ್ಜ್ ಕಂ ಬ್ಯಾರೇಜ್ | 0.78 | 50.73 | 990 | 2012 |
| 3 | ಹಾಲಹಳ್ಳಿ | 2.46 | 104.27 | 3366 | 2013 |
| 4 | ಚಂದಾಪುರ | 0.78 | 58.66 | 990 | 2011 |
| | **ಒಟ್ಟು** | **4.80** | **271.50** | **6336** | |

| | | |
|---|---|---|
| ಇ | ಈ ಸರಣಿ ಬ್ಯಾರೇಜ್‌ಗಳ ನಿರ್ಮಾಣದಿಂದ ಒಟ್ಟು ಎಷ್ಟು ಎಕರೆ ಪ್ರದೇಶಕ್ಕೆ ನೀರಾವರಿ ಸೌಲಭ್ಯವನ್ನು ಕಲ್ಪಿಸಲಾಗಿದೆ; (ಸಂಪೂರ್ಣ ವಿವರ ನೀಡುವುದು) | ಮೇಲ್ಕಂಡ 4 ಸರಣಿ ಬ್ರಿಡ್ಜ ಕಂ ಬ್ಯಾರೇಜ್ ಕಾಮಗಾರಿಗಳನ್ನು ಈಗಾಗಲೆ ಪೂರ್ಣಗೊಳಿಸಲಾಗಿದ್ದು, ಸದರಿ ಬ್ಯಾರೇಜಗಳಿಂದ ಒಟ್ಟು 6336 ಹೆಕ್ಟೇರ್ ಜಮೀನಿಗೆ ನೀರಾವರಿ ಕಲ್ಪಿಸಲು ಉದ್ದೇಶಿಸಲಾಗಿರುತ್ತದೆ. ಸದರಿ ಪೂರ್ಣಗೊಂಡ ಬ್ರಿಡ್ಜ್ ಕಂ ಬ್ಯಾರೇಜುಗಳಡಿ ಶೇಖರಣೆಯಾಗುವ ಹಿನ್ನೀರನ್ನು ರೈತರು ತಮ್ಮ ಜಮೀನುಗಳಿಗೆ ಸ್ವಂತ ಪಂಪಸೆಟ್‌ಗಳನ್ನು ಅಳವಡಿಸಿಕೊಂಡು, ನೀರಾವರಿಗೆ ಬಳಸಿಕೊಳ್ಳುತ್ತಿದ್ದಾರೆ. |
| ಈ | ಹಾಗಿದ್ದಲ್ಲಿ, ನೂರಾರು ಕೋಟಿ ರೂಪಾಯಿಗಳು ವೆಚ್ಚ ಮಾಡಿ ನಿರ್ಮಾಣ ಮಾಡಲಾದ ಯೋಜನೆಯಲ್ಲಿ ಅಕ್ರಮ ಮತ್ತು ಲೋಪದೋಷಗಳು ಎಸಗಿದ್ದ ಅಧಿಕಾರಿಗಳ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ? (ಮಾಹಿತಿ ನೀಡುವುದು) | 2016 ನೇ ಸಾಲಿನಲ್ಲಿ ಬೃಹತ್ ಪ್ರಮಾಣದ ಪ್ರವಾಹ ಬಂದಿದ್ದು, ಕೆಲವು ಗೇಟುಗಳು ಸ್ವಲ್ಪ ಪ್ರಮಾಣದಲ್ಲಿ ಹಾನಿಗೊಳಗಾಗಿದ್ದು, ಹಾನಿಗೊಳಗಾಗಿದ್ದ ಗೇಟುಗಳು 2017 ನೇ ಸಾಲಿನಲ್ಲಿ ಮೂಲ ಗುತ್ತಿಗೆದಾರರಿಂದ ದುರಸ್ತಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ. ಇದರಿಂದ, ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟವಿಲ್ಲದೆ ದುರಸ್ತಿಗೊಳಿಸಲಾಯಿತು. ಆದ್ದರಿಂದ, ಗುತ್ತಿಗೆದಾರರು ಮತ್ತು ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಂಡಿರುವುದಿಲ್ಲ. |

**ಸಂಖ್ಯೆ: ಜಸಂಇ 20 ಎಂಎಲ್‌ಎ 2021**

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು